# ಗ್ರೇಗ್ ನ ಸೂಕ್ಷ್ಮದರ್ಶಕ

ಮಿಲಿಸೆಂಟ್ ಈ. ಸೆಲ್ಸಮ್

ಚಿತ್ರ: ಅರ್ನಾಲ್ಡ್ ಲೋಬಲ್



# ಗ್ರೇಗ್ ನ ಸೂಕ್ಷ್ಮದರ್ಶಕ

ಮಿಲಿಸೆಂಟ್ ಈ. ಸೆಲ್ಸಮ್

ಚಿತ್ರ: ಅರ್ನಾಲ್ಡ್ ಲೋಬಲ್

ಕನ್ನಡಕ್ಕೆ: ಪ್ರಭಾಕರ ನಾನಾವಟಿ



ಗ್ರೇಗ್ ನಿಗೆ ಒಂದು ಸೂಕ್ಷ್ಮದರ್ಶಕ ಬೇಕಿತ್ತು.

“ಅಪ್ಪಾ, ನನಗಾಗಿ ಒಂದು ಸೂಕ್ಷ್ಮದರ್ಶಕ ಕೊಂಡು ತನ್ನಿ.”

ಆತ ಕೇಳಿದನು.

“ಏಕೆ?” ತಂದೆ ಕೇಳಿದರು.

“ಅದರಲ್ಲಿ ನಾವು ಸೂಕ್ಷ್ಮ ವಸ್ತುಗಳನ್ನು ಸರಿಯಾಗಿ

ನೋಡಬಹುದು.” ಗ್ರೇಗ್

“ಸೂಕ್ಷ್ಮ ವಸ್ತುಗಳನ್ನು ಸೂಕ್ಷ್ಮದರ್ಶಕವಿಲ್ಲದೆ ನೋಡಲು ಶಕ್ಯವಿಲ್ಲವೆ?

” ತಂದೆ ಕೇಳಿದರು.





“ಈ ಬಿಂದು ನೋಡು.

ಇದು ಕೂಡ ಚಿಕ್ಕದಿದೆ.

ಈ ಇರುವೆಯನ್ನು ನೋಡು.

ಇದು ಕೂಡ ಚಿಕ್ಕದಿದೆ.

ಇದರ ಹೊರತಾಗಿ ಮತ್ತೇನು ನೋಡುವಿ?”

“ನನ್ನ ಗೆಳೆಯ, ಬಿಲ್ಲಿಯ ಹತ್ತಿರ
ಮಾಯಕ್ರೋಸ್ಕೋಪ ಇದೆ.
ಒಂದು ಡಬ್ಬಿಯಲ್ಲಿ ಅದು ಇತ್ತು.
ಅದರ ಜತೆ ನಾಲ್ಕಾರು ಸ್ಲೈಡ್ ಗಳು ಇದ್ದವು.
ಅದರಿಂದ ಜೇಡಹುಳದ ಕಾಲಿನ ಮೇಲಿನ
ಕೂದಲುಗಳನ್ನು ನೋಡಬಹುದು.
ಹಕ್ಕಿಗಳ ಗರಿಗಳ ಮೇಲಿರುವ
ಕೊಂಡಿಯಾಕಾರಗಳನ್ನು ನೋಡಬಹುದು.
ಅವು ಬಹು ಸಣ್ಣವಾಗಿರುತ್ತವೆ.
ಆದರೆ ಸೂಕ್ಷ್ಮದರ್ಶಕದಲ್ಲಿ ದೊಡ್ಡದಾಗಿ
ಕಾಣುತ್ತವೆ. ಅವುಗಳನ್ನೆಲ್ಲ ನನಗೆ
ನೋಡಬೇಕಾಗಿದೆ.” ಗ್ರೇಗ್
ಹೇಳತೊಡಗಿದನು.





“ನೀನು ಬಿಲ್ಲಿಯ ಮಾಯಕ್ರೋಸ್ಕೋಪಿನಲ್ಲಿಯೇ ಏಕೆ ನೋಡುವದಿಲ್ಲ?” ಗ್ರೇಗ್ ನ ತಂದೆ ಕೇಳಿದರು.

“ಬಿಲ್ಲಿಯು ಅದನ್ನು ಉಪಯೋಗಿಸುತ್ತಾನೆ.
ನನಗೆ ನನ್ನ ಸ್ವಂತದ ಮಾಯಕ್ರೋಸ್ಕೋಪು ಬೇಕು.” ಗ್ರೇಗ್ ಹಟ ಹಿಡಿದನು.



“ನಾನು ಅದರ ಬಗ್ಗೆ ವಿಚಾರ ಮಾಡುವೆ.

ಅವು ಬಹಳ ತುಟ್ಟಿಯ ವಸ್ತುಗಳು.”

“ ಬಿಲ್ಲಿಯ ತಂದೆ ಅದನ್ನು ಅಗ್ಗದಲ್ಲಿ ಕೊಂಡಿದ್ದಾರೆ.”

“ ಸರಿ. ಅವರ ಜತೆ ಮಾತಾಡುತ್ತೇನೆ.”

ಗ್ರೇಗ್ ನ ತಂದೆ ಹೇಳಿದರು.

ಗ್ರೇಗ್ ನ ತಂದೆ, ಬಿಲ್ಲಿಯ ತಂದೆ ಜತೆ ಮಾತಾಡಿದರು.

ಅವರು ಅಗ್ಗದಲ್ಲಿ ಸಿಗುವ ಮಾಯಕ್ರೋಸ್ಕೋಪದ ಶೋಧ ಮಾಡತೊಡಗಿದರು.

ಆಟಿಗೆಯ ಅಂಗಡಿಗೆ ಹೋಗಿ ಬಂದರು.

ದೊಡ್ಡ ಮಾಲ್ ಗಳಿಗೆ ಭೆಟ್ಟಿ ಕೊಟ್ಟರು.

ಆ ಮೇಲೆ ಅವರಿಗೆ ಹಳೆಯ ಮಾಯಕ್ರೋಸ್ಕೋಪ ಮಾರುವ ಅಂಗಡಿ ದೊರಕಿತು.

ಒಂದು ದಿನ ಮಾಯಕ್ರೋಸ್ಕೋಪ ಇರುವ  ಡಬ್ಬಿಯನ್ನು ಅವರು ಮನೆಗೆ ತಂದರು.

ಅವರು ಗ್ರೇಗ್ ನನ್ನು ಕರೆದರು.

ಗ್ರೇಗ್ ಓಡುತ್ತಲೇ ಬಂದನು.

“ಈ ಡಬ್ಬಿಯಲ್ಲಿ ಏನಿದೆ” ಗ್ರೇಗ್ ಕೇಳಿದ.

“ತೆರೆದು ನೋಡು.” ತಂದೆ ಹೇಳಿದರು.

ಗ್ರೇಗ್ ಡಬ್ಬಿಯ ಮುಚ್ಚಳ ತೆರೆದನು.

“ಓಹ್! ಎಂತಹ ಚೆಂದದ ಮಾಯಕ್ರೋಸ್ಕೋಪ!!”

ಆಶ್ಚರ್ಯಚಕಿತನಾಗಿ ಗ್ರೇಗ್ ಹೇಳಿದನು.



“ಮಾಯಕ್ರೋಸ್ಕೋಪ ಬಹಳ ತುಟ್ಟಿಯಲ್ಲಿ ಸಿಕ್ಕಿತೇ”? ಗ್ರೇಗ್ ಕೇಳಿದ.“ಅಷ್ಟೇನು ತುಟ್ಟಿ ಇಲ್ಲ.” ತಂದೆ ಹೇಳಿದರು.
ಗ್ರೇಗ್ ನ ತಂದೆ ಮಾಯಕ್ರೋಸ್ಕೋಪನ್ನು ಕಿಟಕಿಯ ಎದುರಿಗಿರುವ ಮೇಜಿನ ಮೇಲೆ ಇಟ್ಟರು. ಅದರ ಕೆಳಗೆ ಒಂದು ಕಾಜಿನ ಪಟ್ಟಿಯನ್ನು ಸರಿಸಿದರು. “ಇದಕ್ಕೆ ಸ್ಲೈಡ್ ಎನ್ನುವರು.” ತಂದೆ ಹೇಳಿದರು. “ಇದರಲ್ಲಿಂದ ನೋಡಿ.” ಅವರು ಹೇಳಿದರು. ಗ್ರೇಗ್ ನು ಕುಳಿತನು. ಮಾಯಕ್ರೋಸ್ಕೋಪದಿಂದ ನೋಡಲು ಪ್ರಯತ್ನಿಸತೊಡಗಿದನು.



“ನನಗಂತೂ ಏನೂ ಕಾಣಲೊಲ್ಲದು.

ಎಲ್ಲ ಕಡೆ ಬರಿ ಕತ್ತಲು.” ಆತ ಹೇಳಿದ.

“ಕೆಳಗಿರುವ ಕನ್ನಡಿಯನ್ನು ಸ್ವಲ್ಪ ತಿರುಗಿಸು. ಇದರಿಂದ ಸ್ಲೈಡ್ ದ ಮೇಲೆ ಪ್ರಕಾಶ ಬೀಳುವದು.”. ತಂದೆ ನುಡಿದರು. ಗ್ರೇಗ್ ಕನ್ನಡಿಯನ್ನು ಹಿಂದೆ-ಮುಂದೆ ಮಾಡಿದನು. “ಈಗ ನನಗೆ ಚೆನ್ನಾಗಿ ಕಾಣುತ್ತದೆ.”

“ಸರಿ. ಇನ್ನು ಕೆಲ ಪುಟ್ಟ ಪುಟ್ಟ ವಸ್ತುಗಳನ್ನು ಸ್ಲೈಡ್ ಮೇಲಿಟ್ಟು ನೋಡು.”

ಆತನ ತಂದೆ ಹೇಳಿದರು.

ಗ್ರೇಗ್ ಸುಮ್ಮನೆ ಕುಳಿತನು,

‘ನೀವು ನನಗಾಗಿ ಸ್ಲೈಡ್  ಮೇಲಿಡಲು ಏನಾದರೂ ತಂದಿದ್ದಿರಾ?”

“ಇಲ್ಲ, ಮಗು.” ತಂದೆ ಹೇಳಿದರು.

“ನೀನೇ ಕೆಲ ಸೂಕ್ಷ್ಮ ವಸ್ತುಗಳನ್ನು ಹುಡುಕಿ  ಸ್ಲೈಡ್ ತಯಾರಿಸು.”

“ನಾನು ಏನು ನೋಡಲಿ? ಚಿಕ್ಕ ವಸ್ತುಗಳು ಯಾವವು?” ಎಂದೆನ್ನುತ್ತ ಆತ ಅಡಿಗೆ ಮನೆಗೆ ಓಡಿದನು.





“ಅಮ್ಮ, ನನಗೆ ನೋಡಲಿಕ್ಕೆ ಚಿಕ್ಕ ಪದಾರ್ಥಗಳನ್ನು ಕೊಡು.”

ಗ್ರೇಗ್ ನುಡಿದನು.

ಅಮ್ಮನ ಕೈಯಲ್ಲಿ ಉಪ್ಪಿನ ಪಾತ್ರೆ ಇತ್ತು. ಒಂದಿಷ್ಟು ಉಪ್ಪನ್ನು ಅವನ ಕೈಮೇಲಿಟ್ಟಳು,

ಗ್ರೇಗ್ ಓಡುತ್ತ ಹೋಗಿ ಸ್ಲೈಡ್ ನ್ನು ತಂದನು.

ಆ ಸ್ಲೈಡ್ ಮೇಲೆ ಉಪ್ಪಿನ ಹಲವಾರು ಹರಳುಗಳನ್ನಿಟ್ಟನು

.



“ಸ್ವಲ್ಪ ತಡೆ. ಇದನ್ನು ಸರಿಯಾಗಿ ಉಪಯೋಗಿಸುವ ಬಗೆ ಹೇಳಿ ಕೊಡುತ್ತೇನೆ.” ತಂದೆ ಹೇಳಿದರು.

ಅವರು ಮಾಯಕ್ರೋಸ್ಕೋಪದ ಮಗ್ಗುಲಿನ ಚಕ್ರಗಳನ್ನು ತಿರುಗಿಸಿ ಸ್ಲೈಡನ್ನು ಸರಿಯಾಗಿ ನೋಡುವ ಬಗೆಯನ್ನು ತಿಳಿಸಿ ಹೇಳಿದರು.

ಗ್ರೇಗ್ ಒಂದು ಸ್ಲೈಡ್ ಮೇಲೆ ಉಪ್ಪನ್ನು ಇಟ್ಟು ಕೆಳಗೆ ಸರಿಸಿದನು.

“ಇದೇನಿದು? ಉಪ್ಪಿನ ಹರಳುಗಳು ಎಷ್ಟು ದೊಡ್ಡದಾಗಿ ಕಾಣುತ್ತಲಿವೆ!” ಆಶ್ಚರ್ಯಚಕಿತನಾಗಿ ಗ್ರೇಗ್ ಹೇಳತೊಡಗಿದನು.

“ಅಹುದು,” ಎಂದು ತಂದೆ ತಲೆದೂಗಿದರು.



“ಇದರಲ್ಲಿ ಉಪ್ಪು ತನ್ನ ಈಗಿದ್ದ ಆಕಾರಕ್ಕಿಂತ ನೂರು ಪಟ್ಟು ದೊಡ್ಡದಾಗಿ ಕಾಣುತ್ತೇ.!” ತಂದೆ.

“ ನೂರು ಪಟ್ಟೇ?”  ಗ್ರೇಗ್




ಸ್ವಲ್ಪ ವೇಳೆಯಾದ ಮೇಲೆ ಗ್ರೇಗ್ ನ ತಾಯಿ ಅಲ್ಲಿ ಬಂದಳು.

“ನನಗೂ ಉಪ್ಪನ್ನು ತೋರಿಸಿ.” ಅವಳು ಕೇಳಿದಳು. ಅವಳು ಕೂಡ ಮಾಯಕ್ರೋಸ್ಕೋಪದಿಂದ ಉಪ್ಪನ್ನು ನೋಡಿದಳು.

“ಅಬ್ಬಾ! ಎಷ್ಟು ದೊಡ್ಡದಾಗಿವೆ!  ಈ ಉಪ್ಪಿನ ಹರಳುಗಳು ಕಲ್ಲಿನ ಹರಳಿನಂತೆ ಕಾಣುತ್ತವೆ. ಗ್ರೇಗ್ ಅಡಿಗೆ ಮನೆಯಲ್ಲಿ ಹೋಗುವ. ನಾನು ಇನ್ನಷ್ಟು ಚಿಕ್ಕ ಚಿಕ್ಕ ಪದಾರ್ಥಗಳನ್ನು ತೋರಿಸುತ್ತೇನೆ.” ತಾಯಿ ಹೇಳಿದಳು.

ಆದರೆ ಗ್ರೇಗ್ ಮಾಯಕ್ರೋಸ್ಕೋಪದಲ್ಲಿಯ ಉಪ್ಪಿನ ಹರಳುಗಳನ್ನೇ ನೀರಿಕ್ಷಿಸುತ್ತಿದ್ದನು.



“ಈ ಸ್ಲೈಡ್ ಮೇಲೆ ಎರಡು ನೀರಿನ ಹನಿಗಳನ್ನು ಇಡು.” ತಂದೆ ಹೇಳಿದರು. ಆತನು ನೀರಿನ ಹನಿಗಳನ್ನು ಬಿಟ್ಟನು. ಅದರ ಜತೆ ಉಪ್ಪಿನ ಮೇಲೆ ಕೂಡ ಹನಿಗಳನ್ನು ಎರಚಿದನು. ಮತ್ತೊಮ್ಮೆ ಮಾಯಕ್ರೋಸ್ಕೋಪದಿಂದ ನೋಡತೊಡಗಿದನು.

. “ಅಪ್ಪ, ಉಪ್ಪು ಕರಗಿ ಚಿಕ್ಕದಾಗತೊಡಗಿದೆ. ಅದು ನಷ್ಟವಾಗುತ್ತದೆ. ಹೋಗಿಬಿಟ್ಟಿತು.”

ಗ್ರೇಗ್ ಕೂಗಿ ಹೇಳಿದ.





“ನಾನಿಟ್ಟ ಉಪ್ಪು ಮಾಯವಾಯಿತು! ಅದೆಲ್ಲಿ ಹೋಗಿರಬಹುದು?” ಗ್ರೇಗ್ ಕೇಳಿದ.

ಅದು ನೀರಲ್ಲಿ ಕರಗಿರಬಹುದು. ತಂದೆ ಹೇಳಿದರು. ಸ್ಲೈಡ್ ನ್ನು ಬಿಸಿಲಲ್ಲಿ ಇಡು. ನೀರು ಹೊರಬೀಳುವದು.

ಗ್ರೇಗ್ ನು ಸ್ಲೈಡ್ ನ್ನು ಬಿಸಿಲಲ್ಲಿ ಇಟ್ಟು ಬಂದನು.

“ನಾನಿನ್ನು ಸಕ್ಕರೆಯನ್ನು ಮಾಯಕ್ರೋಸ್ಕೋಪದಲ್ಲಿ ನೋಡುತ್ತೇನೆ. ಅಮ್ಮ ನನಗೆ ಸಕ್ಕರೆ ಕೊಡು.” ಗ್ರೇಗ್ ಹೇಳಿದ.

ತಾಯಿ ಒಂದಿಷ್ಟು ಸಕ್ಕರೆ ಕೊಟ್ಟಳು, ಗ್ರೇಗ್ ಸ್ಲೈಡ್ ಮೇಲೆ ಸುರುವಿದನು.



ಮತ್ತೇ ತಿರುಗಿ ಬಂದು  ಮಾಯಕ್ರೋಸ್ಕೋಪದಲ್ಲಿ ಸ್ಲೈಡ್ ನ್ನು ಇಟ್ಟು ನೋಡತೊಡಗಿದ.

ಸಕ್ಕರೆ ಕೂಡ ಕಲ್ಲಿನ ಹರಳುಗಳ ಹಾಗೆ ಕಾಣುತ್ತಿತ್ತು.

“ಆದರೆ ಸಕ್ಕರೆಯ ಹರಳುಗಳು ಉಪ್ಪಿನ ಹರಳುಗಳ ಹಾಗೆ ಒಂದೇ ಸಮ ಇಲ್ಲ.” ಗ್ರೇಗ್ ನ ನೀರಿಕ್ಷಣೆ.

“ಒಂದಿಷ್ಟು ನೀರು ಸುರುವಿ ನೋಡು.”

“ಇಲ್ಲಪ್ಪ, ಉಪ್ಪಿನ ಹಾಗೆ ಸಕ್ಕರೆ ಮಾಯವಾದರೆ... ? “

“ಉಪ್ಪಿನ ಸ್ಲೈಡ್ ಒಣಗಿದ್ದರೆ ಒಳಗೆ ತೆಗೆದುಕೊಂಡು ಬಾ.” ತಂದೆಯ ಆಜ್ಞೆ.



ಗ್ರೇಗ್ ನು ಹೊರಗೆ ಹೋಗಿ ನೋಡಿ ಬಂದನು. “ಅಪ್ಪ,

ನೀರಿನಿಂದ ಉಪ್ಪು ಹೊರಬರುತ್ತಲಿದೆ.”

ಉಪ್ಪಿದ್ದ ಸ್ಲೈಡ್ ನ್ನು ಮತ್ತೊಮ್ಮೆ ಮಾಯಕ್ರೋಸ್ಕೋಪದಲ್ಲಿ

ನೋಡಿದಾಗ

ಅವು ಬೇರೆ ತರಹ ಕಾಣುತ್ತಿದ್ದವು.

“ನೀರಿನಲ್ಲಿ ಕ್ರಿಸ್ಟಲ್ಸ ಚೆನ್ನಾಗಿ ತಯಾರಾಗುತ್ತವೆ.”

ತಂದೆ ಹೇಳಿದರು. “ಕ್ರಿಸ್ಟಲ್ಸ ಅಂದರೆ.... ಗ್ರೇಗ್ ನ

ಆಶ್ಚರ್ಯೋದ್ಗಾರಗಳು “ಅಂದರೇನು?”

“ಸರಿಯಾಗಿ ನೋಡು.”





ಗ್ರೇಗ್ ಮಾಯಕ್ರೋಸ್ಕೋಪಿನಲ್ಲಿಂದ ಮತ್ತೊಮ್ಮೆ ನೋಡಿದನು.

"ಅಬ್ಬ! ಎಷ್ಟು ಚೆಂದ!

ಗಾಜಿನಿಂದ ಮಾಡಿದ ಹಾಗೆ ಕಾಣುತ್ತವೆ."

“ನಾನು ಕೂಡ ನೋಡುತ್ತೇನೆ.” ತಂದೆ ಹೇಳಿದರು.

“ಅಮ್ಮನನ್ನು ಕೂಡ ಕರೆ.” ಗ್ರೇಗ್ ತಾಯಿಯನ್ನು ಕರೆದನು.

ತಾಯಿಯು ಕೂಡ ಮಾಯಕ್ರೋಸ್ಕೋಪಿನಲ್ಲಿಂದ ಉಪ್ಪಿರುವ ಸ್ಲೈಡ್ ನ್ನು ನೋಡಿದಳು.

“ಇವೆಲ್ಲ ವಜ್ರದಂತೆ ಹೊಳೆಯುತ್ತವೆ.”

“ಸರಿಯಾಗಿ ಹೇಳಿದೆ.”

“ವಜ್ರದ ಹಾಗೆ ಉಪ್ಪಿನ ಮತ್ತು ಸಕ್ಕರೆಯ ಪ್ರತಿಯೊಂದು ಕ್ರಿಸ್ಟಲ್ ಕ್ಕೆ ಚೂಪಾದ ಅಂಚುಗಳಿರುತ್ತವೆ.”

“ ಎಲ್ಲ ಕ್ರಿಸ್ಟಲ್ ಗಳಿಗೆ ಅಂಚುಗಳಿರುತ್ತವೇಯೆ?”

“ ಅಹುದು ಎಲ್ಲಕ್ಕೂ. “



“ನಾನು ಕೂಡ ನೋಡುತ್ತೇನೆ.” ತಂದೆ ಹೇಳಿದರು. “ಅಮ್ಮನನ್ನು ಕೂಡ ಕರೆ.” ಗ್ರೇಗ್ ತಾಯಿಯನ್ನು ಕರೆದನು.

ತಾಯಿಯು ಕೂಡ ಮಾಯಕ್ರೋಸ್ಕೋಪಿನಲ್ಲಿಂದ ಉಪ್ಪಿರುವ ಸ್ಲೈಡ್ ನ್ನು ನೋಡಿದಳು. “ಇವೆಲ್ಲ ವಜ್ರದಂತೆ ಹೊಳೆಯುತ್ತವೆ.”

“ಸರಿಯಾಗಿ ಹೇಳಿದೆ.”

“ವಜ್ರದ ಹಾಗೆ ಉಪ್ಪಿನ ಮತ್ತು ಸಕ್ಕರೆಯ ಪ್ರತಿಯೊಂದು ಕ್ರಿಸ್ಟಲ್ ಕ್ಕೆ ಚೂಪಾದ ಅಂಚುಗಳಿರುತ್ತವೆ.”

“ ಎಲ್ಲ ಕ್ರಿಸ್ಟಲ್ ಗಳಿಗೆ ಅಂಚುಗಳಿರುತ್ತವೇಯೆ?”

“ ಅಹುದು ಎಲ್ಲಕ್ಕೂ. “

ಸ್ಲೈಡ್ ಒಣಗಿದ ಮೇಲೆ ಮತ್ತೊಮ್ಮೆ ನೋಡತೊಡಗಿದನು.

ಸಕ್ಕರೆಯ ಸ್ಫಟಿಕಗಳು ಗಾಜಿನ ಹೂವಿನಂತೆ ಹೊಳೆಯುತ್ತಿದ್ದವು,

"ಎಷ್ಟು ಚೆಂದದ ಸ್ಫಟಿಕಗಳು!" ಗ್ರೇಗ್ ಹೇಳಿದನು.

"ನಾವೀಗ ಕರಿ ಮೆಣಸಿನ ಪುಡಿಯನ್ನಿಟ್ಟು ನೋಡುವ."

ಗ್ರೇಗ್ ಒಂದಿಷ್ಟು ಪುಡಿಯನ್ನು ಸ್ಲೈಡ್ ಮೇಲಿಟ್ಟು

ನೋಡತೊಡಗಿದನು.  "ಇದರಲ್ಲಿ ಯಾವ ಸ್ಫಟಿಕಗಳು ಇಲ್ಲವಲ್ಲ?"

ಗ್ರೇಗ್ ನುಡಿದನು. "ಕರಿ ಮೆಣಸಿನ ಪುಡಿ ಮಣ್ಣಿನ ಧೂಳಿ ಹಾಗೆ

ಕಾಣುತ್ತೇ.!"





ಮರು ದಿನ ಶಾಲೆಗೆ ಬಿಡುವು. ಗ್ರೇಗ್ ನ ಗೆಳೆಯ. ಬಿಲ್ಲಿ ಅವರ ಮನೆಗೆ ಬಂದ. “ತಡೆ, ನಾನು ನನ್ನ ಮಾಯಕ್ರೋಸ್ಕೋಪ ತೋರಿಸುತ್ತೇನೆ.” ಗ್ರೇಗ್ ಹೇಳಿದ.

“ನಿನ್ನ ಮಾಯಕ್ರೋಸ್ಕೋಪ ನಿಜವಾಗಿಯೂ ಬಹಳ ಚೆಂದವಾಗಿದೆ.” ಬಿಲ್ಲಿ ಹೇಳಿದನು.

“ನಿನ್ನ ಸ್ಲೈಡ್ ಗಳನ್ನು ತೋರಿಸು.”

“ನಾನೇ ಸ್ಲೈಡಗಳನ್ನು ತಯಾರಿಸಿದ್ದೇನೆ.” ಗ್ರೇಗ್ ಹೆಮ್ಮೆಯಿಂದ ಹೇಳಿದ.

ಆಮೇಲೆ ಅವನು ಸಕ್ಕರೆ ಮತ್ತು ಉಪ್ಪು ಗಳಿದ್ದ ಸ್ಲೈಡ್ ಗಳನ್ನು ಬಿಲ್ಲಿಗೆ ತೋರಿಸಿದನು.

ಬಿಲ್ಲಿ ಮಾಯಕ್ರೋಸ್ಕೋಪದಿಂದ ನೋಡಿದನು. “ಇವು ಸ್ಫಟಿಕಗಳು. ಸಕ್ಕರೆ ಮತ್ತು ಉಪ್ಪಿನ ಕ್ರಿಸ್ಟಲ್ಸಗಳ ಚೂಪಾದ ಅಂಚುಗಳು ಹೊಳೆಯುವ ವಜ್ರದಂತೆ ಇರುತ್ತವೆ.” ಗ್ರೇಗ್ ಹೇಳಿದನು.

“ಎಲ್ಲ ವಸ್ತುಗಳು ಸ್ಫಟಿಕದಿಂದ ತಯಾರಾಗುತ್ತವೆಯೇ?” ಬಿಲ್ಲಿಯ ಪ್ರಶ್ನೆ.

“ಇಲ್ಲ, ಕರಿಮೆಣಸಿನ ಪುಡಿಯನ್ನು ನೋಡು.” ಎಂದೆನ್ನುತ್ತ ಆ ಸ್ಲೈಡ್ ನ್ನು ತೋರಿಸಿದನು.

“ಇನ್ನಷ್ಟು ವಸ್ತುಗಳನ್ನು ನೋಡುವ.” ಆತ ಹೇಳಿದ.

“ನಾವು ಹಿಟ್ಟನ್ನು ನೋಡುವ. ನೀನೆಂದಾದರೂ ಹಿಟ್ಟನ್ನು ನೋಡಿದೆಯಾ?

ಬೆಣ್ಣೆಯನ್ನು ನೋಡುವ, ಆಮೇಲೆ ಹಾಲನ್ನು…”

“ಒಂದೊಂದಾಗಿ ಇವೆಲ್ಲವನ್ನು ನೋಡುವ.”

ಗ್ರೇಗ್ ಹೇಳಿದನು.

ಒಂದಿಷ್ಟು ಹಿಟ್ಟನ್ನು ತಂದು ಸ್ಲೈಡ್ ಮೇಲಿಟ್ಟನು.

“ಒಂದಿಷ್ಟು ನೀರಿನ ಹನಿಗಳನ್ನು ಸುರುವು.” ಬಿಲ್ಲಿ ಹೇಳಿದ.

“ಹಿಟ್ಟು ನೀರಿನಲ್ಲಿ ಕರಗಬಹುದೇ?” ಗ್ರೇಗ್ ಕೇಳಿದನು.

“ನನಗೆ ಗೊತ್ತಿಲ್ಲ.” ಬಿಲ್ಲಿಯ ಉತ್ತರ.

ಗ್ರೇಗ್ ನು ಹಿಟ್ಟಿನ ಮೇಲೆ

ನೀರಿನ ಹನಿಗಳನ್ನು ಬಿಟ್ಟನು



ಆತ ಮಾಯಕ್ರೋಸ್ಕೋಪದಲ್ಲಿ ಇಣಿಕಿ ಹಾಕಿದ.

“ಇಲ್ಲ,   ಹಿಟ್ಟು ನೀರಲ್ಲಿ ಕರಗಲಿಲ್ಲ.” ಗ್ರೇಗ್ ಹೇಳಿದ.

“ನಿನ್ನ ಹತ್ತಿರ ಸ್ಲೈಡ್ ಮುಚ್ಚುವ ಕವ್ವರ ಇದೆಯಾ?” ಬಿಲ್ಲಿ,

“ಕವ್ವರದಿಂದ ಸ್ಲೈಡ್ ಮುಚ್ಚು.”

“ಯಾಕೆ?” ಗ್ರೇಗ್

“ಮತ್ತಷ್ಟು ಸ್ಪಷ್ಟವಾಗಿ ಕಾಣುತ್ತೇ” ಬಿಲ್ಲಿ,



ಗ್ರೇಗ್ ಕವ್ವರ ಹಾಕುತ್ತಲಿದ್ದ. “ಅಷ್ಟೊಂದು

ಬಿಗಿಯಾಗಿ  ಹೊದಿಸಬೇಡ.” ಬಿಲ್ಲಿ,

“ಏಕೆ, ಏನಾಗುತ್ತದೆ?”  ಗ್ರೇಗ್

“ಅದರೊಳಗೆ ಹವೆ ಹೋಗಿ ಗುಳ್ಳೆಗಳು

ಕಾಣತೊಡಗುವವು.”  ಬಿಲ್ಲಿಯ ಉತ್ತರ

“ಓಹ! ಒಳ್ಳೆಯದೇ ಆಯಿತು. ನನಗೆ ಗುಳ್ಳೆಗಳನ್ನು

ಕೂಡ     ನೋಡಬೇಕಾಗಿದೆ.” ಗ್ರೇಗ್

ಆತನು ಸ್ಲೈಡ್ ನ್ನು ಕೆಳಗೆ ಸರಿಸಿದನು.

“ಕಪ್ಪು ಕಪ್ಪು ಬುಗ್ಗೆ ಗಳು ಎಲ್ಲಿಂದ ಬಂದವು?”

“ಅವೇ ಹವೆಯ ಗುಳ್ಳೆಗಳು.”

“ನನಗಂತೂ ಅವು ಚನ್ನಾಗಿ ಕಾಣುತ್ತವೆ.

ಹಿಟ್ಟು ಎಲ್ಲಿದೆ?”

“ನನಗೆ ನೋಡಲು ಬಿಡು.” ಬಿಲ್ಲಿ.

“ಆ ಕಪ್ಪು

ಬುಗ್ಗೆಗಳ ನಡುನಡುವೆ ಬಿಳಿ ಬಿಳಿಯಾಗಿ

ಕಾಣುವ

ವಸ್ತುವೇ ಹಿಟ್ಟು.”



ಅಷ್ಟರಲ್ಲಿ ತಾಯಿ ಬಂದಳು. “ಹಿಟ್ಟು?” ಅವಳು ಕೇಳಿದಳು

“ನನಗೂ ಹಿಟ್ಟು ನೋಡಬೇಕು.” ಅವಳು ನೊಡತೊಡಗಿದಳು.

“ಏನಿದು? ಬರಿ ಕಪ್ಪು ಗುಳ್ಳೆಗಳು...”

“ಅವು ಹವೆಯ ಗುಳ್ಳೆಗಳು.” ಗ್ರೇಗ್



“ಆ ಗುಳ್ಳೆಗಳ ನಡುವೆ ಚಿಕ್ಕ ಚಿಕ್ಕ ವಸ್ತುಗಳು ಕಾಣಬಹುದು. ಅದೇ ಹಿಟ್ಟು.”

“ನಿನಗೆ ಇದೆಲ್ಲ ಹೇಗೆ ತಿಳಿಯಿತು?” ತಾಯಿಯ ಪ್ರಶ್ನೆ.

“ಸ್ವಲ್ಪ, ಸ್ವಲ್ಪ. ಬಹಳ ಇಲ್ಲ.” ಎಂದೆನ್ನುತ್ತ ಗ್ರೇಗ್ ಬಿಲ್ಲಿಯ ಕಡೆ ನೋಡಿದನು.

ಗ್ರೇಗ್ ನ ತಾಯಿ ಹೊಲಿಯಲೆಂದು ಮಶಿನ್ ಮೇಲೆ ಕುಳಿತಳು.

ಗ್ರೇಗ್ ಮತ್ತು ಬಿಲ್ಲಿ, ಮಾಯಕ್ರೋಸ್ಕೋಪದಿಂದ ಬೇರೆ ಬೇರೆ ಚಿಕ್ಕ ಪುಟ್ಟ ವಸ್ತುಗಳನ್ನು ನೀರಿಕ್ಷಿಸತೊಡಗಿದರು.

ಅವರು ಬೆಣ್ಣೆಯನ್ನಿಟ್ಟು ನೋಡಿದರು.

ಹಾಲು ಹನಿಗಳನ್ನಿಟ್ಟು ನೋಡಿದರು.

ಧೂಳನ್ನು ನೋಡಿದರು.

ಅವರ ಮಾತುಗಳನ್ನೆಲ್ಲ ತಾಯಿ ಆಲಿಸುತ್ತಿದ್ದಳು.

"ಇದನ್ನು ನೋಡು, ಎಷ್ಟು ಚೆಂದ."

"ಓಹ! ಇಲ್ಲಿ ನೋಡು."

ಅವರು ತಾಯಿಯ ಹತ್ತಿರ ಬಂದು "ನಾವು ಈ ದಾರವನ್ನು ನೋಡಬಹುದೇ?" ಎಂದು ಕೇಳಿದರು.





“ಅವಶ್ಯ” ತಾಯಿ ಹೇಳಿದಳು.

“ಇದು ಅರಿವೆ ಹೊಲಿಯುವ ದಾರವು.”

ಗ್ರೇಗ್ ನು ದಾರಿನ ಒಂದು ತುಂಡನ್ನು ತೆಗೆದುಕೊಂಡನು.



“ಇದನ್ನು ನೋಡು. ಅಮ್ಮ ನೀನು ಇದನ್ನು ನೋಡು.”

ಗ್ರೇಗ್ ನ ತಾಯಿ, ಬಿಲ್ಲಿ ನೋಡಿದರು.

“ಇದನ್ನು ನೋಡು. ಅಮ್ಮ ನೀನು ಇದನ್ನು ನೋಡು.”

ಗ್ರೇಗ್ ನ ತಾಯಿ, ಬಿಲ್ಲಿ ನೋಡಿದರು.

“ಈ ಅರಳೆಯ ದಾರವನ್ನು ಎಷ್ಟೋ ಎಳೆಗಳನ್ನು ಹೊಸೆತು ಮಾಡಿರುತ್ತದೆ.”

“ಬಹಳೇ ಚೆಂದ!” ತಾಯಿ ಹೇಳಿದಳು.

“ಇನ್ನು ಉಣ್ಣೆಯ ದಾರವನ್ನು ನೋಡಿ.”

ಮತ್ತೇ ಗ್ರೇಗ್ ಉಣ್ಣೆಯ ದಾರದ ಒಂದು ತುಂಡನ್ನು ಮಾಯಕ್ರೋಸ್ಕೋಪ ಮೇಲೆ ಇಟ್ಟು ನೋಡಿದನು.

“ಉಣ್ಣೆಯ ದಾರ ಕೂಡ ಎಷ್ಟೋ ದಾರಗಳನ್ನು ಹೊಸೆತು ಮಾಡಿರುತ್ತದೆ. “



“ಬಿಲ್ಲಿ. ಇಲ್ಲಿ ನೋಡು.” ಗ್ರೇಗ್ ಹೇಳಿದ.

“ಇದರ ಎಳೆಗಳನ್ನು ನೋಡು. ಅದರ ಮೇಲೆ ಎಷ್ಟೊಂದು ಚೆಂದದ ಪರೆಗಳಿವೆ. ಮೀನಿನ ಮೇಲೆ ಇದ್ದಂತೆ.”

ಬಿಲ್ಲಿ ಕೂಡ ನೋಡಿದನು.

“ಅಹುದು. ನಿಜವಾಗಿ. ಎಲ್ಲ ಕೂದಲುಗಳು ಕೂಡ ಹೀಗೆ ಇರಬಹುದು.” ಬಿಲ್ಲಿ ಒಟಗುಡಿದ.



ಕೂಡಲೇ ಗ್ರೇಗ್ ಚೀರಿದ.

“ಅರೆ, ಉಣ್ಣೆ ಮತ್ತು ಕೂದಲಿಗೆ ಏನು ನಂಟುತನ?”

“ಸ್ವಲ್ಪ ವಿಚಾರ ಮಾಡು.”

“ಉಣ್ಣೆ ಎಲ್ಲಿಂದ ಬರುತ್ತದೆ?” “ಕುರಿಗಳಿಂದ...”

“ಹಾಂ, ನನಗೆ ತಿಳಿಯಿತು.

ಉಣ್ಣೆ ಎಂದರೆ ಕುರಿಗಳ ಕೂದಲೇ!”

“ನೋಡಿದೆಯಾ?”

ಸೋಮವಾರ ಗ್ರೇಗ್ ಸ್ಕೂಲಿಗೆ ಹೋಗಿ ತಿರುಗಿ ಬಂದನು.

ಆಗ ಅವನ ತಲೆಯಲ್ಲಿ ಒಂದು ವಿಚಾರ ಬಂದಿತು.

“ಅಮ್ಮ, ನಾನು ಉಳಿದ ಕೂದಲುಗಳನ್ನು ನೋಡುವ.” ತನ್ನ ತಲೆ ಮೇಲಿನ ಕೂದಲನ್ನು ಕಿತ್ತಿ ಸ್ಲೈಡ್ ಮೇಲೆ ಇಟ್ಟನು.

“ಮಾಯಕ್ರೋಸ್ಕೋಪದಲ್ಲಿ ಹೇಗೆ ಕಾಣುತ್ತದೆ ನೋಡುವ.” ಆತ ಕೂದಲನ್ನು ನೋಡತೊಡಗಿದನು.

“ಉಣ್ಣೆಯ ಹಾಗೇಯೆ ಕಾಣುತ್ತೇ?” ತಾಯಿ ಕೇಳಿದಳು.





“ನಾನು ಕುರಿಯಲ್ಲ.

ಆದರೂ ನನ್ನ ಕೂದಲಿಗೂ ಕೂಡ ಪರಿಗಳಿವೆ.”

“ಗ್ರೇಗ್...” ಅಮ್ಮ ಕರೆದಳು.

“ನಾಯಿಯ ಕೂದಲುಗಳು ಹೇಗಿವೆ ನೋಡು.”

“ಅಮ್ಮ ಏನು ಹೇಳುತ್ತೀ?

ನನಗೆ ನಾಯಿ ಎಲ್ಲಿ ಸಿಗಬೇಕು?”



ಅಷ್ಟರಲ್ಲಿ, ಕರೆಗಂಟೆಯ ಧ್ವನಿ. ಗ್ರೇಗ್ ಬಾಗಿಲನ್ನು ತೆರೆದನು.

“ನಾನು ಒಳಗೆ ಬರಲೇ?” ಮಿಸೆಸ್ ಬ್ರೂಮ್ ಕೇಳಿದರು.



ಗ್ರೇಗ್ ಅವರ ಜತೆ ಇದ್ದ ನಾಯಿಯನ್ನೇ ನೋಡತೊಡಗಿದ.

“ಪ್ಲೀಜ, ಒಳಗೆ ಬನ್ನಿ.” ಗ್ರೇಗ್ ಹೇಳಿದ.

“ಹೆಲೋ ಮಿಸೆಸ್ ಬ್ರೂಮ್,

ಗ್ರೇಗ್ ನಾಯಿಯನ್ನು ನೋಡು.

ಸರಿಯಾದ ಸಮಯಕ್ಕೆ ಬಂದಿದೆ.

ನಾವು ನಿಮ್ಮ ಈ ಕೋಕೋನ ಕೂದಲನ್ನು

ತಗೊಳ್ಳಬಹುದೇ?

ಗ್ರೇಗ್ ಅದನ್ನು

ಮಾಯಕ್ರೋಸ್ಕೋಪದಲ್ಲಿಂದ

ನೋಡಬಯಸುತ್ತಾನೆ.”



"ಇದೇನು. ಬಹು ಸುಲಭ." ನಾಯಿಯನ್ನು ಒಂದೆಡೆ ಸರಿಸಿ ಒಂದು ಕೂದಲನ್ನು ಕಿತ್ತಿ ಕೊಟ್ಟರು. ಗ್ರೇಗ್ ಕೂದಲಿನ ಮೇಲೆ ಎರಡು ಹನಿ ನೀರು ಬಿಟ್ಟು ಸ್ಲೈಡ್ ಮೇಲಿಟ್ಟ. ಅದರ ಮೇಲೆ ಕವ್ವರದಿಂದ ಮುಚ್ಚಿದ. ಗ್ರೇಗ್ ಅದನ್ನು ಮಾಯಕ್ರೋಸ್ಕೋಪದಲ್ಲಿಂದ ನೋಡತೊಡಗಿದ.

"ನನಗೂ ತೋರಿಸು" ಅಮ್ಮ ಹೇಳಿದಳು. "ನನ್ನ ನಾಯಿಯ ಕೂದಲು ಹೇಗಿದೆ ಎಂಬುದನ್ನು ನನಗೂ ತೋರಿಸು." ಮಿಸೆಸ್ ಬ್ರೂಮ್ ಹೇಳಿದರು.



“ನೀವು ಮೊದಲು.” ಗ್ರೇಗ್ ಹೇಳಿದ.

ಮಿಸೆಸ್ ಬ್ರೂಮ ನೋಡಿದರು.

ಆ ಮೇಲೆ ಅಮ್ಮ ನೋಡಿದಳು.

“ಇದನ್ನು ನೋಡಿದ ಮೇಲೆ ನಂಬಲಿಕ್ಕೆ

ಶಕ್ಯವಾಗಲಿಕ್ಕಿಲ್ಲ!”

ಮಿಸೆಸ್ ಬ್ರೂಮ ಹೇಳಿದರು.



“ಒಂದು ತೆಳ್ಳಗಿನ ಕೂದಲು ಕಂಬದಂತೆ ಕಾಣುತ್ತದೆ.
ಗ್ರೇಗ್ ಕೋಕೋನಿಗೂ ನೋಡಬೇಕಾಗಿದೆ.”
ಎಂದು ಕೋಕೋನಿಗೆ
ಮುದ್ದಿನಿಂದ ಕೇಳಿದರು.



ಕೋಕೋ ಬರಿ ಬಾಲ ಅಲುಗಾಡಿಸಿತು.

.

ಒಂದು ದಿನ ಗ್ರೇಗ್ ಅಮ್ಮನನ್ನು, “ನನ್ನ ಟೀಚರಳಿಗೆ ಮಾಯಕ್ರೋಸ್ಕೋಪ ನೋಡಬೇಕಂತೆ. ಅದನ್ನು ನಾನು ಸ್ಕೂಲಿಗೆ ಒಯ್ಯಲೇ?” ಎಂದು ಕೇಳಿದ.

“ಶಾಲೆಯಲ್ಲಿ ಮಾಯಕ್ರೋಸ್ಕೋಪ ಇಲ್ಲವೇ?” ತಾಯಿ ಕೇಳಿದಳು.

“ಇಲ್ಲ, ನನ್ನ ಕ್ಲಾಸಿನಲ್ಲಿ ಇಲ್ಲ.”

“ಹುಶಾರಾಗಿ ತೆಗೆದುಕೊಂಡು ಹೋಗು.”

ಗ್ರೇಗ್ ಮಾಯಕ್ರೋಸ್ಕೋಪ ತೆಗೆದುಕೊಂಡು ಹೋದ. ಶಾಲೆಯಿಂದ ಸಂಜೆ ತಿರುಗಿ ಬಂದ ಮೇಲೆ “ಅಮ್ಮ ಎಲ್ಲ ಸಜೀವ ವಸ್ತುಗಳು ಜೀವಕೋಶದಿಂದ ಮಾಡಿವೆಯಂತೆ ಎಂದು ನಮ್ಮ ಟೀಚರ ಹೇಳುತ್ತಿದ್ದರು.”

“ಜೀವಕೋಶ ಎಂದರೆ..?” ಅಮ್ಮ ಕೇಳಿದಳು.



“ಅಹುದು, ಜೀವಕೋಶಗಳಿಂದ

ಎಲ್ಲ ಪ್ರಾಣಿಗಳ ರಚನೆಯಾಗಿರುತ್ತದೆ.”

“ಅಹುದೇ! ಹಾಗಿದ್ದರೆ ನನಗೂ ತೋರಿಸು.” ಅಮ್ಮ

ಹೇಳಿದಳು.

“ಅಮ್ಮ, ಒಂದು ಇರುಳ್ಳಿ ಕೊಡು.” ಗ್ರೇಗ್ ಹೇಳಿದ. ಇರುಳ್ಳಿಯನ್ನು ಪಾರದರ್ಶಕ ತಿಳುವಾದ ಹೋಳಾಗುವಂತೆ ತುಂಡರಿಸಿದ. ಅದನ್ನು ಸ್ಲೈಡ್ ಮೇಲಿಟ್ಟು ನೋಡಿದ. “ಅಮ್ಮ ನೋಡಿಲ್ಲಿ. ಇವೇ ಜೀವಕೋಶಗಳು.” ಅಮ್ಮ ಮಾಯಕ್ರೋಸ್ಕೋಪದಲ್ಲಿಂದ ನೋಡಿದಳು.

“ಇದೇನಿದು? ಗೋಡೆಯ ಇಟ್ಟಂಗಿಯಂತೆ ಕಾಣುತ್ತವೆ.” ಅವಳು ಹೇಳಿದಳು.





“ನಾನೀಗ ನನ್ನ ಜೀವಕೋಶಗಳನ್ನು ತೋರಿಸುವೆ.”

ಗ್ರೇಗ್ ಹೇಳಿದ. “ಮೈಗೆ ಗಾಯ ಮಾಡುವಹಾಗಿಲ್ಲ.”

ತಾಯಿಯ ಎಚ್ಚರಿಕೆ.

“ಅಂತಹದೇನು ಮಾಡುವದಿಲ್ಲ. ನೀನೇ ನೋಡು.”

ಗ್ರೇಗ್ ಹೇಳಿದ. ಅಲ್ಲಿಯೇ ಇದ್ದ ಟೂಥಪಿಕ್ ನ್ನು

ಬಾಯಿಯಲ್ಲಿ ಹಾಕಿ ಚೆನ್ನಾಗಿ ಸವರಿದನು..





ಆ ಮೇಲೆ ಟೂಥಪಿಕ್ ತುದಿಯನ್ನು ನೀರಲ್ಲಿ ತೊಯ್ಯಿಸಿ ಸ್ಲೈಡ್ ಮೇಲಿಟ್ಟನು.

ಅದರ ಮೇಲೆ ಕವ್ಹರ ಹಾಕಿದನು.

ಮಾಯಕ್ರೋಸ್ಕೋಪದಲ್ಲಿಂದ ನೋಡಿದನು.

“ನೋಡಮ್ಮ, ಇವು ನನ್ನ ಜೀವಕೋಶಗಳು.”

ತಾಯಿಯು ನೋಡಿದಳು.

“ಎಷ್ಟು ಚೆಂದವಿವೆ.”

ಆಶ್ಚರ್ಯಚಕಿತಳಾಗಿ ನುಡಿದಳು.



ಗ್ರೇಗ್ ನಿಗೆ ಮತ್ತೊಂದು ವಿಚಾರ ಹೊಳೆಯಿತು.
“ನಾನೀಗ ಎಲೆಗಳನ್ನು ನೋಡುವೆ. ಅಲ್ಲಿಯೂ ನನಗೆ
ಜೀವಕೋಶಗಳು ಸಿಗಬಹುದು.”

ಮಗ್ಗುಲಲ್ಲಿದ್ದ ಫಿಶ್ ಟ್ಯಾಂಕದಲ್ಲಿದ್ದ ಎಲೆಯ ತುಂಡಿನಿಂದ
ಸ್ಲೈಡ್ ತಯಾರಿಸಿದನು.



“ಹಸಿರು ಬಣ್ಣದ ಇಟ್ಟಂಗಿಗಳು.”

ಆತನು ತಾಯಿಗೆ ಕರೆದು ತೋರಿಸಿದನು. ಆ ಮೇಲೆ ಆತನು ಎಲೆಯ ಅಂಚಿನ ಮೇಲೆ ಏನೋ ಸರಿದಾಡುತ್ತಿದ್ದದ್ದನ್ನು ಕಂಡನು.

“ಓಹ್...!”

ಅಷ್ಟರಲ್ಲಿ ಆತನ ತಂದೆ ಮನೆಗೆ ತಿರುಗಿ ಬಂದರು. “ಊಟಕ್ಕೆ ಏನಿದೆ?” ಅವರು ಕೇಳಿದರು. “ನನಗೆ ಹಸಿವೆಯಾಗಿದೆ. “

ಗ್ರೇಗ್ ನ ತಾಯಿ “ಊಟಕ್ಕೆ ಬಡಿಸುವೆ.” ಎಂದು ಹೇಳಿ ಅಡಿಗೆ ಮನೆಗೆ ಹೋದರು.

“ಗ್ರೇಗ್ ಮಾಯಕ್ರೋಸ್ಕೋಪದಲ್ಲಿ ಏನು ಇಟ್ಟಿದ್ದಾನೆ ಅದನ್ನು ನೋಡಿ.” ಎಂದು ಹೇಳಿದಳು.

“ನೀವೆ ಬಂದು ನೋಡಿ.” ಗ್ರೇಗ್ ತಂದೆಯನ್ನು ಕರೆದನು.

“ಇದು ಜಗದಲ್ಲಿಯೇ ಹೆಚ್ಚು ಚಟುವಟಿಕೆಗಳಿರುವ ಸ್ಥಳ ಎಂದೆನ್ನಿಸುತ್ತದೆ.”

ಗ್ರೇಗ್ ನ ತಂದೆ ಇಣಿಕಿ ನೋಡಿದರು.

“ಇವೆಲ್ಲ ಜೀವಗಳೇ!” ಅವರು ಹೇಳಿದರು. “ಮತ್ತು ಪ್ರತಿಯೊಂದು ಸಜೀವವು ಒಂಟಿ ಕೋಶಗಳಿಂದ ಮಾಡಲ್ಪಟ್ಟಿರುತ್ತದೆ.”



“ನಾನು ಮೊದಲನೇ ಬಾರಿ ಈ ಜೀವಕೋಶಗಳ ಬಗ್ಗೆ ಕೇಳಿದೆ. ಮತ್ತು ನನಗೆ ಜೀವಗಳೆಲ್ಲ ಬಿಡಿ ಬಿಡಿಯಾದ ಕೋಶಗಳಿಂದ ಆಗಿರುತ್ತವೆ ಎಂಬುದು ತಿಳಿಯಿತು. ಈ ಎಲೆಯ ಮೇಲೆನೇ ಸಾವಿರಾರು ಜೀವಗಳು ವಾಸಿಸುತ್ತಿರಬಹುದು.”

ಗ್ರೇಗ್ ನ ತಂದೆ ಅವುಗಳನ್ನು ನೋಡುತ್ತ ಕುಳಿತರು.



ಗ್ರೇಗ್ ನ ತಂದೆ ಸಾಕಷ್ಟು ಸಮಯ ನೋಡುತ್ತಿದ್ದರು.

ಗ್ರೇಗ್ ಅವರ ದಾರಿ ಕಾಯತ್ತಿದ್ದ.

ಅಷ್ಟರಲ್ಲಿ ಅವನ ತಾಯಿ ಹೊರ ಬಂದಳು.

ಗ್ರೇಗ್ ನ ತಂದೆ ಅವಳನ್ನು "ನೀನು ನೋಡಿದೆಯಾ?" ಎಂದು ಕೇಳಿದರು.

ತಾಯಿಯು ಕೂಡ ನೋಡಿದಳು.

ಗ್ರೇಗ್ ತನ್ನ ಸರದಿಗಾಗಿ ಕಾಯುತ್ತಿದ್ದ.



ಗ್ರೇಗ್ ತಂದೆಯ ಕಡೆ ನೋಡುತ್ತ "ನಾನು ನಿಮಗೆ ನನಗಾಗಿ ಒಂದು ಮಾಯಕ್ರೋಸ್ಕೋಪ ತನ್ನಿ ಎಂದು ಹೇಳಿದ್ದೆ. ಆದರೆ ಅದು ನನ್ನ ಪ್ರಮಾದವಾಯಿತು ಎಂದೆನ್ನಿಸುತ್ತದೆ.

ನಿಜವಾಗಿ ನೋಡಿದರೆ ಇಡೀ ಕುಟುಂಬಕ್ಕಾಗಿ ಮೂರು ಮಾಯಕ್ರೋಸ್ಕೋಪಗಳು ಬೇಕು."

ಎಂದು ಹೇಳಿದ.

An I Can Read Book®

# ಗ್ರೇಗ್ ನ ಸೂಕ್ಷ್ಮದರ್ಶಕ

ಗ್ರೇಗ್ ನಿಗೆ ತನ್ನ ಮಾಯಕ್ರೋಸ್ಕೋಪಕ್ಕಾಗಿ ಬಹಳ ದಿನ ದಾರಿ ಕಾಯ ಬೇಕಾಯಿತು. ಆದರೆ ಮಾಯಕ್ರೋಸ್ಕೋಪ ದೊರೆತ ಮೇಲೆ ಚಿಕ್ಕ ಚಿಕ್ಕ ವಸ್ತುಗಳ ವಿಶ್ವವನ್ನೇ ಆತನು ಶೋಧಿಸಿದನು. ಈಗೀಗ ಅವನಿಗೆ ಮನೆ ಬಿಟ್ಟು ಹೊರಬೀಳಬೇಕೆಂದು ಅನ್ನಿಸುವದಿಲ್ಲ. ಮಾಯಕ್ರೋಸ್ಕೋಪದಲ್ಲಿಂದ ಉಪ್ಪು, ಸಕ್ಕರೆ, ದಾರ – ಮತ್ತು ಕೂದಲು ಮುಂತಾದವುಗಳನ್ನು ನೋಡತೊಡಗಿದನು. ತನ್ನ ಈ ಶೋಧದಲ್ಲಿ ತನ್ನ ತಂದೆ-ತಾಯಿಗಳನ್ನು ಕೂಡ ಪಾಲುಗಾರರಾಗಿ ಮಾಡಿಕೊಂಡನು. ಕೊನೆಯಲ್ಲಿ ಇಡೀ ಕುಟುಂಬಕ್ಕೆ ಕೇವಲ ಒಂದೇ ಮಾಯಕ್ರೋಸ್ಕೋಪದಿಂದ ತೃಪ್ತಿಯಾಗಲಾರದು ಎಂದು ಯೋಚಿಸತೊಡಗಿದನು.